ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಬೀದರ್ ಜಿಲ್ಲೆಯಲ್ಲಿ ಐಟಿಐ ಕಾಲೇಜುಗಳಿಗೆ ಉಪ ಪ್ರಾಚಾರ್ಯರರನ್ನು ನೇಮಕ ಮಾಡುವ ಬಗ್ಗೆ

ಶ್ರೀ ಅರವಿಂದ ಕುಮಾರ ಅರಳಿ(ವಿಧಾನಸಭೆಯಿಂದ ಚುನಾಯಿತರಾದವರು) –

02 (83) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೀದರ್ ಜಿಲ್ಲೆಯಲ್ಲಿರುವ ಐಟಿಐ ಕಾಲೇಜುಗಳಿಗೆ ಉಪ ಪ್ರಾಚಾರ್ಯರನ್ನು ಜೂನ್ ತಿಂಗಳ 2020ರ ಒಳಗಾಗಿ ನೇಮಕಾತಿ ಮಾಡಲಾಗುವುದೆಂದು ಹಿಂದಿನ ಅಧಿವೇಶನದಲ್ಲಿ ಆಶ್ವಾಸನೆಯನ್ನು ನೀಡಲಾಗಿದ್ದು, ಈ ಪ್ರಕ್ರಿಯೆ ಯಾವ ಹಂತದಲ್ಲಿದೆ; ಅಥವಾ ಇದನ್ನು ಸಾಕಾರಗೊಳಿಸಲಾಗಿದೆಯೇ;

(ಆ) ಜಿಲ್ಲೆಯಲ್ಲಿ ಎಷ್ಟು ಐಟಿಐ ಕಾಲೇಜುಗಳಿವೆ; ಅವುಗಳಲ್ಲಿ ಎಷ್ಟು ಕಾಲೇಜುಗಳಲ್ಲಿ ಪ್ರಾಚಾರ್ಯರು ಮತ್ತು ಉಪ ಪ್ರಾಚಾರ್ಯರು ಕಾರ್ಯನಿರ್ವಹಿಸುತ್ತಿದ್ದಾರೆ? (ಸಂಪೂರ್ಣ ಮಾಹಿತಿ ನೀಡುವುದು)